


# ಕರ್ನಾಟಕ ಸ್ಕೌಟ್ ಮತ್ತು ಗೈಡ್

## KARNATAKA SCOUT & GUIDE

*News Magazine*

VOL. 2 JANUARY 2002 No. 1




ಶ್ರೀ ವೀರಕುಮಾರ ಪಾಟೀಲ ಮಾನ್ಯ ಇಂಧನ ಸಚಿವರು ದೀಪ ಬೆಳಗಿಸಿ ಜಾಂಬೋರೇಟನ್ನು ಉದ್ಘಾಟಿಸಿದರು. ಚಿತ್ರದಲ್ಲಿ ಶ್ರೀ ರಮೇಶ್ ಕುಡಚಿ ವಿಧಾನ ಸಭಾ ಸದಸ್ಯರು ◀ ಶ್ರೀ ಪ್ರಭಾಕರ ಕೋರೆ ಎಂ. ಎಲ್. ಸಿ. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು ಹಾಗೂ ಶ್ರೀ ಅಂಜುಂ ಪರವೇಜ್ ಭಾ.ಆ.ಸೇ. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್ ಬೆಳಗಾವಿ.

ಸಮಾರೋಪ ಸಮಾರಂಭದಲ್ಲಿ ಜಾಂಬೋರೇಟ್ ಸ್ಮರಣ ಸಂಚಿಕೆ "ಸ್ಫೂರ್ತಿ"ಯನ್ನು ಜಿಲ್ಲಾ ಪಂಚಾಯ್ತಿ ಅಧ್ಯಕ್ಷರಾದ ಶ್ರೀಮತಿ ಲಲಿತಾ ಎಂ. ಚೌಗಲಾ ಬಿಡುಗಡೆ ಮಾಡಿದರು ▶ ಚಿತ್ರದಲ್ಲಿ ಶ್ರೀ ಡಿ.ಬಿ. ಇನಾಂದರ್ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರು ಶ್ರೀಮತಿ ವಂದನಾ ಬೆಳಗುಂದಕರ್ ಪೂಜ್ಯ ಮಹಾಪೌರರು, ಬೆಳಗಾವಿ.




**ಹೊಸ ವರ್ಷದ 'ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್'ನ ಹಾರ್ದಿಕ ಶುಭಾಶಯಗಳು**

# ಪೋಷಕರಿಗೆ ಸಂದೇಶ

## ನಿಮ್ಮ ಹುಡುಗ / ಹುಡುಗಿ / ಸ್ಕೌಟ್ / ಗೈಡ್ ಆಗಬೇಕು. ಏಕೆಂದರೆ,

1. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳನ್ನು ತೊಡಗಿಸುವಂತೆ ಮಾಡುತ್ತದೆ.
2. ಸ್ಕೌಟಿಂಗ್ / ಗೈಡಿಂಗ್ - ಯಾವುದೇ ಉದ್ಯೋಗದಲ್ಲಿ ಹುಡುಗ / ಹುಡುಗಿಯ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುತ್ತದೆ.
3. ಸ್ಕೌಟಿಂಗ್ / ಗೈಡಿಂಗ್ - ಒಂದು ಸೈನಿಕ ಚಳವಳಿಯಲ್ಲ, ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸ ಹೊರಟಿದ್ದೇವೆಯೇ ವಿನಃ ಅನುಕರಣೆ ಸಿಪಾಯಿಗಳ ಒಂದು ತಂಡವನ್ನಲ್ಲ.
4. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.
5. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತದೆ.
6. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ, ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.
7. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.
8. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಗೆ ಆರೋಗ್ಯ ತಂದು ಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸು ಗಳಿಸುತ್ತಾರೆ.
9. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.
10. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.
11. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟು ಕೊಂಡಿವೆ.
12. ಸ್ಕೌಟಿಂಗ್ / ಗೈಡಿಂಗ್ - ನಿಮ್ಮ ಹುಡುಗ / ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.

-ಬೇಡನ್ ಪೊವೆಲ್



# ಕರ್ನಾಟಕ ಸ್ಕೌಟ್ ಮತ್ತು ಗೈಡ್
# KARNATAKA SCOUT AND GUIDE


## STATE MONTHLY NEWS MAGAZINE

**Vol - 2** **January - 2002** **No.1**




### CONTENTS



### HAPPINESS

Happiness is not based on Possession, Power, Prestige but on RELATIONSHIPS With PEOPLE you LOVE and Respect.

# ಮುಖ್ಯ ಆಯುಕ್ತರ ನುಡಿ

ಆತ್ಮಿಯರೇ,

ತಮಗೆಲ್ಲಾ ನೂತನ ವರುಷದ ಹಾರ್ದಿಕ ಶುಭಾಶಯಗಳು: ಈ ವರ್ಷದಲ್ಲಿ ಸಂಸ್ಥೆಯು ಹಮ್ಮಿಕೊಂಡಿರುವ ಎಲ್ಲಾ ಕಾರ್ಯಕ್ರಮಗಳೂ ಯಶಸ್ವಿಯಾಗಿ ನಡೆಯಲು ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್‌ರವರ ಆದರ್ಶ, ಚಿಂತನೆ ಹಾಗೂ ಕಾರ್ಯ ಯೋಜನೆಗಳು ನಮಗೆ ಮಾರ್ಗದರ್ಶಿಯಾಗಲಿ ಎಂದು ಆಶಿಸುತ್ತೇನೆ.

ದಿನಾಂಕ 4 ರಿಂದ 10 ನೇ ಡಿಸೆಂಬರ್‌ವರೆಗೆ ಬೆಳಗಾವಿಯಲ್ಲಿ 24ನೇ ರಾಜ್ಯ ಸ್ಕೌಟ್ಸ್ - ಗೈಡ್ಸ್ ಜಾಂಬೋರೇಟ್ ಅತ್ಯಂತ ಯಶಸ್ವಿಯಾಗಿ ಜರುಗಿರುವ ಬಗ್ಗೆ ತಾವು ಈಗಾಗಲೇ ದೂರದರ್ಶನ, ಪತ್ರಿಕಾ ಮಾಧ್ಯಮ ಹಾಗೂ ಜಾಂಬೋರೇಟ್‌ನಲ್ಲಿ ಭಾಗವಹಿಸಿದ 4,500 ಕ್ಕೂ ಹೆಚ್ಚಿನ ಸ್ಕೌಟ್ಸ್ - ಗೈಡ್ಸ್, ರೋವರ್ಸ್ - ರೇಂಜರ್ಸ್‌ಗಳ ಹಾಗೂ ಸ್ಕೌಟರ್ಸ್ - ಗೈಡರ್ಸ್‌ಗಳ ಮುಖೇನ ತಿಳಿದುಕೊಂಡಿದ್ದೀರೆಂದು ನಂಬಿದ್ದೇನೆ.

ಚೌಗ್ಲೆವಾಡಿ (ತಿಲಕವಾಡಿ) ವಾಯುಪಡೆಯ 75 ಎಕರೆ ವಿಸ್ತೀರ್ಣದ ವಿಶಾಲ ಮೈದಾನದಲ್ಲಿ ನಡೆದ ಈ ಆಕರ್ಷಕ ಜಾಂಬೋರೇಟ್ ನಾವೆಲ್ಲಾ ಹೆಮ್ಮೆಪಡುವಂತಿತ್ತು. ಈ ಜಾಂಬೋರೇಟ್ ಯಶಸ್ಸಿಗೆ ಕಾರಣಕರ್ತರಾದ ಜಿಲ್ಲಾ ಸ್ಕೌಟ್ಸ್ - ಗೈಡ್ಸ್ ಸಂಸ್ಥೆ ಪದಾಧಿಕಾರಿಗಳು, ಜಿಲ್ಲಾ ಆಡಳಿತ ವರ್ಗ ಹಾಗೂ ಜಿಲ್ಲಾ ಹಾಗೂ ರಾಜ್ಯ ಸಂಸ್ಥೆ ಸಂಘಟನಾ ವಿಭಾಗದವರು ಅಭಿನಂದನೆಗೆ ಅರ್ಹರು. ಮುಂದಿನ 25 ನೇ ರಾಜ್ಯ ಜಾಂಬೋರೇಟನ್ನು 2003 - 2004 ರಲ್ಲಿ ದಾವಣಗೆರೆ ನಗರದಲ್ಲಿ ನಡೆಸಲು ತೀರ್ಮಾನಿಸಲಾಗಿದೆ.

ಜನವರಿ 4 ರಿಂದ 10 ರವರೆಗೆ (2002) ನೂತನ ಚತ್ತೀಸ್‌ಗಡ್ ರಾಜ್ಯದ ರಾಯ್‌ಪುರದಲ್ಲಿ ಜರುಗಿದ 14 ನೇ ರಾಷ್ಟ್ರೀಯ ಜಾಂಬೋರೇಟ್‌ನಲ್ಲಿ ನಮ್ಮ ರಾಜ್ಯದಿಂದ 400 ಕ್ಕೂ ಹೆಚ್ಚು ಸ್ಕೌಟ್ಸ್ - ಗೈಡ್ಸ್‌ಗಳು ಹಾಗೂ ನಾಯಕರುಗಳು ಭಾಗವಹಿಸಿದ್ದಾರೆ. ರಾಜ್ಯ ಗೈಡ್ಸ್ ಆಯುಕ್ತರೂ ಹಾಗೂ ರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷೆಯಾದ ಶ್ರೀಮತಿ ಎಂ.ಜಿ. ಬೋಪಯ್ಯ, ರಾಷ್ಟ್ರೀಯ ಕಾರ್ಯಕಾರಿ ಹಾಗೂ ಹಣಕಾಸು ಸಮಿತಿಗಳ ಸದಸ್ಯರುಗಳಾದ ಕುಮಾರಿ ರವಿ ವೆಸ್ಲಿ ಹಾಗೂ ಶ್ರೀಯುತ ಐ.ಎ. ಕೈರನ್ನರವರೂ ರಾಷ್ಟ್ರೀಯ ಜಾಂಬೋರೇಟ್‌ನಲ್ಲಿ ಭಾಗವಹಿಸಿ ಹಿಂತಿರುಗಿದ್ದಾರೆ.

ಇನ್ನೊಂದು ಪ್ರಮುಖ ವಿಷಯವೆಂದರೆ, ಸಾಕಷ್ಟು ಜನ ಸಹೋದ್ಯೋಗಿಗಳು ಸಂಸ್ಥೆಯ ಕಾರ್ಯ ಚಟುವಟಿಕೆಗಳಲ್ಲಿ ಮೂರು - ನಾಲ್ಕು ದಶಕಗಳ ಕಾಲ ನಿಕಟವಾಗಿ ಭಾಗವಹಿಸಿ ತಮ್ಮ ವೃತ್ತಿ ಜೀವನದಿಂದ ನಿವೃತ್ತಿಯಾಗಿರುವುದುಂಟು. ಅವರುಗಳ ಅನುಭವ - ತರಬೇತಿ ಕೌಶಲ್ಯ - ನೈಪುಣ್ಯತೆಗಳನ್ನು ಅವರುಗಳು ವಾಸಿಸುತ್ತಿರುವ ಬಡಾವಣೆಯ, ತಾಲ್ಲೂಕು, ಜಿಲ್ಲೆ ಹಾಗೂ ವಿಭಾಗಗಳ ಸ್ಕೌಟ್ಸ್ - ಗೌಡ್ಸ್ ಘಟಕಗಳು ಉಪಯೋಗಿಸಿಕೊಳ್ಳಬೇಕೆಂದು ತಮ್ಮನ್ನು ಕೋರುತ್ತೇನೆ.

ರಾಜ್ಯ ಸಂಸ್ಥೆಯಿಂದ ಈ ಬಗ್ಗೆ ಸಂಬಂಧಪಟ್ಟ ನಿವೃತ್ತ, ಅನುಭವಿ ತರಬೇತಿ ಪಡೆದ ಸ್ಕೌಟರ್ಸ್ - ಗೈಡರ್ಸ್‌ಗಳಿಗೆ ಪತ್ರ ಬೇಕಾದಲ್ಲಿ ರಾಜ್ಯ ಕಾರ್ಯದರ್ಶಿಗೆ ತಿಳಿಸಿದರೆ ಸೂಕ್ತ ಕ್ರಮ ಕೈಗೊಳ್ಳಲಾಗುವುದು.

ಈ ವರ್ಷ ನಾವು ಹಾಕಿಕೊಂಡಿರುವ ಎಲ್ಲ ಕಾರ್ಯಕ್ರಮಗಳನ್ನೂ ಫಲಪ್ರದವಾಗಿ ಜರುಗಿಸುವಲ್ಲಿ ರಾಜ್ಯದ ಎಲ್ಲ ಘಟಕಗಳೂ ಹೆಚ್ಚು ಆಸಕ್ತಿವಹಿಸಿ ಈ ಚಳುವಳಿಯ ಚಿಂತನೆಗಳು ಯುವ ಜನಾಂಗಕ್ಕೆ ತಲುಪುವಲ್ಲಿ ಯಶಸ್ವಿಯಾಗಲಿ ಎಂದು ಆಶಿಸುತ್ತೇನೆ.

ದಿನಾಂಕ : 10.1.2002

ತಮ್ಮ ವಿಶ್ವಾಸಿ,

(ಕೊಂಡಜ್ಜಿ ಬಿ. ಷಣ್ಮುಖಪ್ಪ)




# ಕರ್ನಾಟಕ ರಾಜ್ಯ ೨೪ನೇ ಜಾಂಬೋರೇಟ್, ಬೆಳಗಾವಿ

(ಒಂದು ವರದಿ)

ದಿನಾಂಕ 3ರಂದು ಜಾಂಬೋರೇಟ್‌ಗೆ ಪೂರ್ವಭಾವಿಯಾಗಿ ಆಗಮಿಸಿದ್ದ ಸಿಬ್ಬಂದಿ ಸಭೆಯು ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಆರ್. ವೆಂಕಣ್ಣನವರ ಅಧ್ಯಕ್ಷತೆಯಲ್ಲಿ ನಡೆಯಿತು.

### ಜಾಂಬೋರೇಟ್‌ನ ಆರಂಭ

ದಿನಾಂಕ 4-12-2001 ರಂದು ಜಾಂಬೋರೇಟ್‌ಗೆ ಬಂದ ಸ್ಕೌಟ್ಸ್ : ಗೈಡ್ಸ್ ಹಾಗೂ ಸ್ಕೌಟರ್ಸ್ : ಗೈಡರ್ಸ್‌ಗಳ ನೋಂದಣಿ ಕಾರ್ಯ ನಡೆಯಿತು. ಜಾಂಬೋರೇಟ್‌ಗೆ ಆಗಮಿಸಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಎರಡು ಭಾಗವಾಗಿ ವಿಂಗಡಿಸಲಾಯಿತು. ಸ್ಕೌಟ್ ವಿಭಾಗಕ್ಕೆ ನಾಯಕರಾಗಿ ಶ್ರೀ ಬಿ. ಕೆ. ಪಾಟೀಲ್, ಎಲ್‌ಟಿ (ಸ್ಕೌಟ್), ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಉಷಾ ರಾಮಯ್ಯ, ಎಲ್‌ಟಿ (ಗೈಡ್ಸ್) ನಾಯಕಿಯಾಗಿದ್ದರು.

ಸ್ಕೌಟ್ಸ್ / ಗೈಡ್ಸ್ ವಿಭಾಗಗಳನ್ನು 4 ಉಪ ವಿಭಾಗಗಳನ್ನಾಗಿ ವಿಂಗಡಿಸಿ ಸಂಗೊಳ್ಳಿ ರಾಯಣ್ಣ, ಮಲ್ಲಸರ್ಜ, ಸಿರಸಂಗಿ ಲಿಂಗರಾಜ ಮತ್ತು ಬಾಳಪ್ಪ ಹುಕ್ಕೇರಿ, ಗೈಡ್ ವಿಭಾಗದಲ್ಲಿ ರಾಣಿ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ರೇಣುಕಾ ಎಲ್ಲಮ್ಮ ಮತ್ತು ಮಲಪ್ರಭ ಎಂದು ಹೆಸರಿಡಲಾಗಿತ್ತು. 2364 ಸ್ಕೌಟ್ಸ್, 1260 ಗೈಡ್ಸ್, 358 ಸ್ಕೌಟರ್ಸ್, 131 ಗೈಡರ್ಸ್, 97 ರೋವರ್ಸ್ : ರೇಂಜರ್ಸ್‌ಗಳು ಮತ್ತು ಸಿಬ್ಬಂದಿ ಸೇರಿ ಒಟ್ಟು 4218 ಮಂದಿ ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದರು.

### ಸ್ಥಳೀಯ ಪ್ರತಿಭಾ ಪ್ರದರ್ಶನ

ಸಂಜೆ 6.30 ಕ್ಕೆ ಸ್ಥಳೀಯ ಶಾಲಾ ಕಾಲೇಜುಗಳ ಮಕ್ಕಳಿಂದ ಪ್ರತಿಭಾ ಪ್ರದರ್ಶನ ನಡೆಯಿತು. ಶ್ರೀ ಗೊ. ರು. ಚೆನ್ನಬಸಪ್ಪ, ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ ಹಾಗೂ ಸಹಾಯಕ ರಾಜ್ಯ ಆಯುಕ್ತರು, ಸ್ಕೌಟ್ಸ್ (ಪ್ರಕಟಣೆ) ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದು ಮಕ್ಕಳಿಗೆ ಶುಭ ಹಾರೈಸಿದರು. ಶ್ರೀ ಕೊಂಡಜ್ಜಿ ಬಿ.ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಅಧ್ಯಕ್ಷತೆ ವಹಿಸಿದ್ದರು.




ಸ್ಥಳೀಯ ಪ್ರತಿಭಾ ಪ್ರದರ್ಶನದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ ಶ್ರೀ ಗೊ.ರು. ಚೆನ್ನಬಸಪ್ಪ, ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಭಾರತ್ ಸ್ಕೌಟ್ ಮತ್ತು ಗೈಡ್ಸ್, ಕರ್ನಾಟಕ, ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು.

### ಪಥ ಸಂಚಲನ

ದಿನಾಂಕ 5-12-2001 ರಂದು ಬೆಳಿಗ್ಗೆ 10.00 ಘಂಟೆಗೆ ಬೆಳಗಾವಿ ವಿಭಾಗದ ಆರಕ್ಷಕ ಮಹಾ ನಿರೀಕ್ಷಕರಾದ ಶ್ರೀ ಓಂಪ್ರಕಾಶ್, ಐಪಿಎಸ್‌ರವರು ಧ್ವಜ ತೋರಿಸುವ ಮೂಲಕ ಪಥ ಸಂಚಲನವನ್ನು ಉದ್ಘಾಟಿಸಿದರು. ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ

ಮುಖ್ಯ ಆಯುಕ್ತರು, ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಉಪಸ್ಥಿತ ರಿದ್ದರು. ಈ ಪಥ ಸಂಚಲನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ನೀತಿಬೋಧಕ, ಸಾಕ್ಷರತೆ, ಆರೋಗ್ಯ, ಪರಿಸರ ಸ್ವಚ್ಛತೆ ಅರಿವು ಮೂಡಿಸುವ ಫಲಕಗಳನ್ನು ಹಿಡಿದು ಸಾಗುತ್ತಿದ ದೃಶ್ಯ ನಗರದ ಜನತೆಯ ಮನ ಸೆಳೆಯುತ್ತಿತ್ತು.



ಬೆಳಗಾಂ ವಿಭಾಗದ ಆರಕ್ಷಕ ಮಹಾನಿರೀಕ್ಷಕರಾದ ಶ್ರೀ ಓಂಪ್ರಕಾಶ್ ಐ.ಪಿ.ಎಸ್.ರವರಿಂದ ಪಥಸಂಚಲನ ಉದ್ಘಾಟನೆ.

## ಉದ್ಘಾಟನಾ ಸಮಾರಂಭ

ಸಂಜೆ 4 ಗಂಟೆಗೆ ಜಾಂಬೋರೇಟ್‌ನ ಉದ್ಘಾಟನಾ ಸಮಾರಂಭ ನಡೆಯಿತು. ಶ್ರೀ ವೀರಕುಮಾರ್ ಪಾಟೀಲ್, ಇಂಧನ ರಾಜ್ಯ ಸಚಿವರು, ಕರ್ನಾಟಕ ಸರ್ಕಾರ, ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಆಯುಕ್ತರು (ಗೈಡ್ಸ್), ಬ್ರಿಗೇಡಿಯರ್, ಶ್ರೀ ಎ.ಬಿ. ಸೈಯದ್, ಕಮಾಂಡೆಂಟ್, ಎಂ.ಎಲ್.ಐ.ಆರ್.ಸಿ., ಬೆಳಗಾವಿ, ವಿಂಗ್ ಕಮಾಂಡರ್, ಶ್ರೀ ಅಮಿತ್ ಕುಮಾರ್, ಭಾರತೀಯ ವಾಯುಪಡೆ, ಬೆಳಗಾವಿ, ಶ್ರೀ ಪ್ರಭಾಕರ ಕೋರೆ, ಎಂ.ಎಲ್.ಸಿ. ಛೇರ್ಮೆನ್, ಕೆ.ಎಲ್.ಇ. ಸೊಸೈಟಿ, ಬೆಳಗಾವಿ ಮತ್ತು ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಇವರುಗಳು ಮುಖ್ಯ ಅತಿಥಿಗಳಾಗ ಭಾಗವಹಿಸಿದ್ದರು. ಶ್ರೀ ರಮೇಶ್ ಎಲ್. ಕುಡಚಿ, ವಿಧಾನಸಭಾ ಸದಸ್ಯರು, ಬೆಳಗಾವಿ ಇವರು ಅಧ್ಯಕ್ಷತೆ ವಹಿಸಿದ್ದರು.

ಮಾನ್ಯ ಮಂತಿಗಳಾದ ಶ್ರೀ ವೀರಕುಮಾರ್ ಪಾಟೀಲ್‌ರವರು ಮಾತನಾಡುತ್ತಾ ಸ್ಕೌಟ್ಸ್, ಗೈಡ್ಸ್ ಚಳುವಳಿ ಹಳ್ಳಿ ಹಳ್ಳಿಗಳನ್ನು ಮುಟ್ಟಬೇಕೆಂದು ತಿಳಿಸಿದರು. ಹಾಗೂ ಸರ್ಕಾರದ ವತಿಯಿಂದ ಆರ್ಥಿಕ ಹಾಗೂ ಆಡಳಿತಾತ್ಮಕ ನೆರವು ಕೊಡಿಸುವುದಾಗಿ ತಿಳಿಸಿದರು. ಪ್ರಾರಂಭದಲ್ಲಿ ಶ್ರೀ ಅಂಜುಂ ಪರ್ವೇಜ್, ಭಾ.ಅ.ಸೇ. ಕಾರ್ಯ ನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಬೆಳಗಾವಿ ಇವರು ಸ್ವಾಗತ ಕೋರಿದರು.

## ವಯಸ್ಕ ನಾಯಕರುಗಳಿಂದ ಶಿಬಿರಾಗ್ನಿ

ಸಂಜೆ 8.30 ಕ್ಕೆ ಸ್ಕೌಟರ್ಸ್, ಗೈಡರ್ಸ್‌ಗಳ ಶಿಬಿರಾಗ್ನಿ ಕಾರ್ಯಕ್ರಮ ಜರುಗಿತು. ಶ್ರೀ ಅನಿಲ್ ಎಂ. ಪೊಥ್ದಾರ್, ಅಧ್ಯಕ್ಷರು, ಬೆಳಗಾವಿ ಅಭಿವೃದ್ಧಿ ಪ್ರಾಧಿಕಾರ, ಬೆಳಗಾವಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಎಸ್. ಶಂಕರಪ್ಪ, ಸೂಪರಿಂಟೆಂಡೆಂಟ್ ಇಂಜಿನೀಯರ್, ಕೆಪಿಟಿಸಿಎಲ್, ಬೆಳಗಾವಿ ಇವರು ಅತಿಥಿಗಳಾಗಿದ್ದರು. ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಕರ್ನಾಟಕ ಇವರು ಅಧ್ಯಕ್ಷತೆ ವಹಿಸಿದ್ದರು.



ಜಾಂಬೋರೇಟ್ ಉದ್ಘಾಟನಾ ಸಮಾರಂಭಕ್ಕೆ ಆಗಮಿಸಿದ ಮಾನ್ಯ ಸಚಿವರಾದ ಶ್ರೀ ವೀರಕುಮಾರ್ ಪಾಟೀಲ್, ಇತರ ಗಣ್ಯರು ಗೌರವ ವಂದನೆ ಸ್ವೀಕರಿಸಿದರು.

## ವಸ್ತು ಪ್ರದರ್ಶನ

ದಿನಾಂಕ 6.12.2001 ರ ಬೆಳಿಗ್ಗೆ 11.30 ಕ್ಕೆ ವಸ್ತು ಪ್ರದರ್ಶನ ಏರ್ಪಡಿಸಲಾಗಿತ್ತು. ಶ್ರೀ ಪಿ.ಎ. ಮೇಘಣ್ಣವರ್, ಆಯುಕ್ತರು, ನಗರ ಪಾಲಿಕೆ, ಶ್ರೀ ಬಿ. ಅಡಗಟ್ಟಿ, ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾವಿ, ಶ್ರೀ ಪಿ.ಎನ್. ಮುರುಗೋಡ್, ಅಬಕಾರಿ ಉಪ ಆಯುಕ್ತರು ಹಾಗೂ ಶ್ರೀ ಮೃತ್ಯಂಜಯ ಸ್ವಾಮಿ, ಉಪ ನಿರ್ದೇಶಕರು, ಕರ್ನಾಟಕ ಭೂ ಸೇನಾ ನಿಗಮ ಇವರುಗಳು ಆಗಮಿಸಿದ್ದರು ಮತ್ತು ವಸ್ತು ಪ್ರದರ್ಶನವನ್ನು ಉದ್ಘಾಟಿಸಿ ವೀಕ್ಷಿಸಿದರು.

ದಿನಾಂಕ 6.12.2001 ಸ್ಕೌಟ್ಸ್ ಗೈಡ್ಸ್ ಮಕ್ಕಳನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಿ ಸೇನಾ ಕಮ್ಯಾಂಡೋ ತರಬೇತಿ ಕೇಂದ್ರಕ್ಕೆ ಕರೆದೊಯ್ಯಲಾಗಿತ್ತು. ಸೇನಾ ಅಧಿಕಾರಿಗಳಿಂದ ಭಾರತೀಯ ಸೇನೆಯ ಧೈರ್ಯ, ಸಾಹಸಗಳ ವಿಚಾರಗಳನ್ನು ಮಕ್ಕಳಿಗೆ ವಿವರಿಸಿ; ಸೇವಾ ಕಮ್ಯೊಂಡೋಗಳು ವಿಶ್ವಾಸಾರ್ಹ ಜಿಗಿತದ ಪಾತ್ಯಕ್ಷಿಕೆಯನ್ನು ಪ್ರದರ್ಶಿಸಿದರು ಹಾಗೂ ಎಲ್ಲಾ 4218 ಸ್ಕೌಟ್ಸ್ : ಗೈಡ್ಸ್‌ಗಳು ಈ ಸಾಹಸ ಪ್ರದರ್ಶನವನ್ನು ವೀಕ್ಷಿಸಿದರು.

## ಜಾನಪದ ಉತ್ಸವ

ಸಂಜೆ 6 ಗಂಟೆಗೆ ಜಾನಪದ ಉತ್ಸವ ಏರ್ಪಡಿಸಲಾಗಿತ್ತು. ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಮುಖ್ಯ ಅತಿಥಿಗಳಾಗಿದ್ದರು. ಶ್ರೀ ಜಿ.ಎಂ. ಪಾಟೀಲ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ಇವರು ಅತಿಥಿಗಳಾಗಿ ಆಗಮಿಸಿ ತಮ್ಮ ಭಾಷಣದಲ್ಲಿ ಮಕ್ಕಳು ತಿಳಿದಿರಬೇಕಾದ ನಾಲ್ಕು ಮುಖ್ಯ ಅಂಶಗಳನ್ನು ಒತ್ತಿ ಕೇಳಿದರು. ಚೆನ್ನಾಗಿ ಆಟ ಆಡಿ, ಊಟ ಮಾಡಿ, ನಿದ್ದೆ ಮಾಡಿ ಮತ್ತು ಚೆನ್ನಾಗಿ ಅಭ್ಯಾಸ ಮಾಡಿ ಎಂದು ಉಪದೇಶಿಸಿದರು. ಶ್ರೀ ಸಿ.ಆರ್. ಮಹಮದ್ ಜಹಿರುದ್ದೀನ್, ರಾಜ್ಯ ಆಯುಕ್ತರು (ಸ್ಕೌಟ್) ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 7.12.2001 ರಂದು ಬೆಳಿಗ್ಗೆ ವೈಮಾನಿಕ ನೆಲೆಯ ಅಧಿಕಾರಿ ಶ್ರೀ ಅರ್ಜುನ್‌ರವರು ಎನ್.ಸಿ.ಸಿ. ಕೆಡೆಟ್‌ಗಳ ಸಹಕಾರದೊಂದಿಗೆ ವಿವಿಧ ಮಾದರಿಯ ವಿಮಾನ ಹಾರಾಟವನ್ನು ಪ್ರದರ್ಶಿಸಿ ಮಕ್ಕಳಲ್ಲಿ ಆಸಕ್ತಿ ಹಾಗೂ ಕುತೂಹಲವನ್ನು ಉಂಟು ಮಾಡಿದರು. ಈ ಕಾರ್ಯಕ್ರಮದ ನಂತರ ಸ್ಕೌಟ್ಸ್ ಗೈಡ್ಸ್‌ಗಳಿಂದ ಶಿಬಿರ ಕೇಂದ್ರದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ನಡೆಸಲಾಯಿತು.

## ಸಾಂಸ್ಕೃತಿಕ ಪ್ರದರ್ಶನ

ಮಧ್ಯಾಹ್ನ 3.30 ಗಂಟೆಗೆ ಶ್ರೀ ವಸಂತ ಕೆ. ಗುಡೋಡಗಿ, ಜಂಟಿ ನಿರ್ದೇಶಕರು, ಯುವಜನ ಸೇವೆ

ಮತ್ತು ಕ್ರೀಡಾ ಇಲಾಖೆ, ಬೆಳಗಾವಿ ವಿಭಾಗ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸ್ಕೌಟ್ಸ್ ಗೈಡ್ಸ್‌ಗಳು ಆಯಾ ಜಿಲ್ಲೆಗಳ ಸಾಂಸ್ಕೃತಿಕ, ಧಾರ್ಮಿಕ ಹಾಗೂ ಐತಿಹಾಸಿಕ ವೈಶಿಷ್ಟತೆಯನ್ನು ಪ್ರತಿ ಬಿಂಬಿಸಿದರು, ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಅಧ್ಯಕ್ಷತೆ ವಹಿಸಿದ್ದರು. ಶ್ರೀ ಪಿ.ಎಸ್. ಉಗಾರ್, ಉಪಾಧ್ಯಕ್ಷರು, ಜಿಲ್ಲಾ ಪಂಚಾಯತ್, ಬೆಳಗಾವಿ ಇವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು.



ಸರ್ವಧರ್ಮ ಪ್ರಾರ್ಥನೆಯಲ್ಲಿ ಪಾಲ್ಗೊಂಡ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ವಿಹಂಗಮ ನೋಟ

### ಹೊರ ಸಂಚಾರ ಮತ್ತು ಸಾಹಸ ಚಟುವಟಿಕೆಗಳು

ದಿನಾಂಕ 8.12.2001 ರ ಬೆಳಿಗ್ಗೆ 9.00 ಗಂಟೆಗೆ ಮಕ್ಕಳಿಗೆ ಹೊರ ಸಂಚಾರ ಮತ್ತು ಸಾಹಸ ಚಟುವಟಿಕೆಗಳ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಕರ್ನಲ್ ಜೆ.ಸಿ. ಮೆಹಂದಿರಟ್ಟಾ, ಎಂ.ಎಲ್.ಐ.ಆರ್.ಸಿ. ಕಾರ್ಯಕ್ರಮ ಉದ್ಘಾಟಿಸಿದರು. ಸ್ಥಳೀಯ ಸೇನಾ ಕಮ್ಯಾಂಡೋ ತರಬೇತಿ ಕೇಂದ್ರಕ್ಕೆ ಮಕ್ಕಳು ಕಾಲ್ನಡಿಗೆಯಲ್ಲಿ ಸಾಗಿದರು. ಅಲ್ಲಿ ಕಮ್ಯಾಂಡೋಗಳ ಮಾರ್ಗದರ್ಶನದಲ್ಲಿ ಸಾಹಸ ಕಾರ್ಯಗಳು ನಡೆದವು. ಮಕ್ಕಳಲ್ಲಿ ಈ ಕಾರ್ಯಕ್ರಮ ಹುಮ್ಮಸ್ಸು ಮತ್ತು ಸ್ಫೂರ್ತಿಯನ್ನು ಮೂಡಿಸಿ ಈ ಸಾಹಸಮಯ ಚಟುವಟಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿತು. ಇದಲ್ಲದೆ, ಕರಕುಶಲತೆ, ಜೇಡಿ ಮಣ್ಣಿನಿಂದ ಮಾದರಿ ತಯಾರಿಕೆ, ವಿದ್ಯುನ್ಮಾದ ಸಾಧನಗಳು ರಂಗೋಲಿ ಪ್ರದರ್ಶನ, ಚಿತ್ರಕಲೆ, ಮುಂತಾದ ಚಟುವಟಿಕೆಗಳ ಜೊತೆಗೆ ಸಾಹಸೀ ಪಯನೀರಿಂಗ್ / ಪ್ರಾಜೆಕ್ಟಗಳನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಮಾಡಿದರು.

### ಆಯುಕ್ತರ ಮತ್ತು ಕಾರ್ಯದರ್ಶಿಗಳ ಸಭೆ

11 ಗಂಟೆಗೆ ರಾಜ್ಯ ಮಟ್ಟದ ಕಾರ್ಯಕಾರಿ ಸಮಿತಿ ಸಭೆ ಮತ್ತು ಜಿಲ್ಲಾ ಮುಖ್ಯ ಆಯುಕ್ತರುಗಳ, ಆಯುಕ್ತರುಗಳ ಹಾಗೂ ಕಾರ್ಯದರ್ಶಿಗಳ ಸಭೆ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆಯಿತು.

### ಬ್ಯಾಂಡ್ ಪ್ರದರ್ಶನ

ಮಧ್ಯಾಹ್ನ 2.30 ಕ್ಕೆ ಜಿಲ್ಲಾ ಮತ್ತು ರಾಜ್ಯದ ವಾದ್ಯ ತಂಡಗಳೊಂದಿಗೆ ಶಿಸ್ತಿನ ನಡಿಗೆ ಪ್ರದರ್ಶನ ನಡೆಯಿತು. ಶ್ರೀ ನರಸಪ್ಪ ಅಡಿಷನಲ್ ಸೂಪರಿಂಟೆಂಡೆಂಟ್ ಆಫ್ ಪೋಲೀಸ್ ಕೆ.ಎಸ್.ಆರ್.ಪಿ. ಬೆಳಗಾವಿ ಇವರು ಮುಖ್ಯ ಅತಿಥಿಗಳಆಗಿ ಆಗಮಿಸಿದ್ದರು. ಮಕ್ಕಳ ಅತ್ಯಂತ ಹರ್ಷದ ಕಾರ್ಯಕ್ರಮವಾದ ಪತಂಗಗಳ ಹಾರಾಟ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

## ಭವ್ಯ ಶಿಬಿರಾಗ್ನಿ

ಸಂಜೆ 6.30 ಕ್ಕೆ ಶ್ರೀ ಸಿ. ಕೊಡ್ಲಿ, ಆಹಾರ ಮತ್ತು ನಾಗರೀಕ ಇಲಾಖೆ ಉಪನಿರ್ದೇಶಕರು, ಬೆಳಗಾವಿ, ಇವರು ಜಾನಪದ ಗೀತೆಯನ್ನು ಹಾಡುವುದರ ಮೂಲಕ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಮತ್ತು ಶ್ರೀ ಜಿ. ಕರಿಬಸಪ್ಪ, ಜಂಟಿ ನಿಬಂಧಕರು, ಸಹಕಾರ ಇಲಾಖೆ, ಬೆಳಗಾವಿ ವಿಭಾಗ ಇವರು ಭಾಗವಹಿಸಿದ್ದರು. ಶ್ರೀ ಗೋಪಾಲರಾವ್, ನಿವೃತ್ತ ಅಧಿಕಾರಿ, ಮೈಸೂರು ಸಕ್ಕರೆ ಕಾರ್ಖಾನೆ ಇವರು ಅಧ್ಯಕ್ಷತೆ ವಹಿಸಿದ್ದರು, ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಶ್ರೀ ಮಹಮದ್ ಜಹೀದ್ದೀನ್, ರಾಜ್ಯ ಆಯುಕ್ತರು (ಸ್ಕೌಟ್ಸ್) ಉಪಸ್ಥಿತರಿದ್ದರು. ಶ್ರೀಮತಿ ಬಿ.ವಿ. ರಾಮರತ್ನ ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್) ಇವರು ಉಪಸ್ಥಿತರಿದ್ದರು.

## ಸರ್ವಧರ್ಮ ಪ್ರಾರ್ಥನೆ

ದಿನಾಂಕ 9.12.2001 ರ ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು. ಈ ಸಭೆಗೆ ಸ್ಥಳೀಯ ಕ್ರೈಸ್ತ ಧರ್ಮ ಗುರು ಫಾದರ್ ರೆವರೆಂಡ್ ಎಡ್ವಿನ್ ಡಿಸೋಜ ಇಸ್ಲಾಂ ಧರ್ಮಗುರು, ಜನಾಬ್ ಅಬ್ದುಲ್ ಅಬೀಜ್ ಮತ್ತು ಹಿಂದೂ ಧರ್ಮಗುರು ಶ್ರೀ ವಿಷ್ಣುಶರ್ಮ ಭಾಗವಹಿಸಿ ಆಶೀರ್ವಚನ ನೀಡಿದರು.

## ಸಮಾರೋಪ ಸಮಾರಂಭ

ಸಂಜೆಯ ಸಮಾರೋಪ ಸಮಾರಂಭಕ್ಕೆ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಅಂಜುಂ ಪರ್ವೇಜ್ ಸ್ವಾಗತ ಕೋರಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಅಧ್ಯಕ್ಷತೆ ವಹಿಸಿದ್ದು, ಆಹಾರ ಮತ್ತು ನಾಗರೀಕ ಸರಬರಾಜು ರಾಜ್ಯ ಸಚಿವರಾದ ಶ್ರೀ ಡಿ.ಬಿ. ಇನಾಂದಾರ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಸ್ಕೌಟಿಂಗ್ ಮತ್ತು ಗೈಡಿಂಗ್ ಮನೆ ಮನಗಳನ್ನು ತಲುಪುವಂತೆ ಮಾಡಬೇಕೆಂದು ಸಚಿವರು ಕರೆ ಇತ್ತರು. ಈ ತರಬೇತಿಯನ್ನು ರಾಜ್ಯದ ಎಲ್ಲಾ ಮಕ್ಕಳಿಗೂ ನೀಡಲು ಸಲಹೆ ಮಾಡಿ ರಾಜ್ಯ ಸರ್ಕಾರದಿಂದ ಆಗಬೇಕಾದ ಕೆಲಸಗಳಿಗೆ ಸಹಕಾರ ನೆರವು ನೀಡಲು ಭರವಸೆಯನ್ನಿತ್ತರು. ಅತಿಥಿಗಳಾಗಿ ಬೆಳಗಾವಿ ನಗರ ಮೇಯರ್ ಶ್ರೀಮತಿ ವಂದನಾ ಬೆಳಗುಂದಕರ್, ಜಿಲ್ಲಾ ಪಂಚಾಯತ್ ಅಧ್ಯಕ್ಷರು ಶ್ರೀಮತಿ ಲಲಿತಾ ಎಂ. ಚೌಗಲಾ ಭಾಗವಹಿಸಿದ್ದರು. ಈ ಸಂಸ್ಥೆ ಒಳ್ಳೆಯ ಸತ್ ಪ್ರಜೆಗಳನ್ನು ನಿರ್ಮಾಣ ಮಾಡುವ ಕಾರ್ಖಾನೆಯಾಗಲೆಂದು ನುಡಿದರು. ರಾಜ್ಯ ಮುಖ್ಯ ಆಯುಕ್ತರಾದ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಅಧ್ಯಕ್ಷ ಭಾಷಣದಲ್ಲಿ ಬೆಳಗಾವಿ ಸ್ಥಳೀಯ ಸಂಸ್ಥೆಗಳ ಕೆಲಸ ಕಾರ್ಯ ಹಾಗೂ ಸಹಕಾರದ ಬಗ್ಗೆ ಅತೀವ ಮೆಚ್ಚುಗೆ ವ್ಯಕ್ತ ಪಡಿಸಿದರು. ಯುವಜನಾಂಗಕ್ಕೆ ಸ್ಕೌಟಿಂಗ್, ಗೈಡಿಂಗ್ ತತ್ವಗಳನ್ನು ಮುಟ್ಟಿಸುವ ಕೆಲಸ ಮಾಡಬೇಕೆಂದು




ಸಮಾರೋಪ ಸಮಾರಂಭದಲ್ಲಿ ಮುಖ್ಯಅತಿಥಿಗಳಾಗಿ ಭಾಗವಹಿಸಿದ್ದ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರಾದ ಶ್ರೀ. ಡಿ.ಬಿ. ಇನಾಂದಾರ್, ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಲಲಿತಾ ಎಂ. ಚೌಗಲಾ, ಜಿಲ್ಲಾ ಪಂಚಾಯ್ತಿ ಮುಖ್ಯ ಕಾರ್ಯನಿರ್ವಹಣಧಿಕಾರಿ ಶ್ರೀ ಅಂಜುಮ್ ಪರವೇಜ್, ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಶ್ರೀ ಆರ್. ವೆಂಕಣ್ಣ, ಶ್ರೀ ಮಹಮದ್ ಜಾಹಿರುದ್ದೀನ್ ಹಾಗೂ ಶ್ರೀ ಸಿ.ಎಸ್. ರೆಡ್ಡಿ

ತಿಳಿಸಿದರು. ಈ ಸಂದರ್ಭಕ್ಕಾಗಿಯೇ ಹೊರತಂದ ಸ್ಮರಣ ಸಂಚಿಕೆ ''ಸ್ಫೂರ್ತಿ'' ಯನ್ನು ಜಿಲ್ಲಾ ಪಂಚಾಯತ್ ಅಧ್ಯಕ್ಷರು ಬಿಡುಗಡೆ ಮಾಡಿದರು.

ಶ್ರೀ ಅನಿಲ್ ಆರ್. ಗುಡಿ, ಜಿಲ್ಲಾ ಮುಖ್ಯ ಆಯುಕ್ತರು, 24 ನೇ ಜಾಂಬೋರೇಟ್ ಯಶಸ್ವಿಯಾಗಿ ನಡೆಯಲು ಸಹಾಯ ಮಾಡಿದ ಜಿಲ್ಲಾ ಆಡಳಿತ ಮಂಡಳಿ ಮತ್ತು ಇತರ ಇಲಾಖೆ ಆಡಳಿತ ವರ್ಗದವರಿಗೆ ಅಭಿನಂದನೆ ಸಲ್ಲಿಸುತ್ತಾ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ತರಬೇತಿ ನೀಡಲಿಕ್ಕೆ ಜಾಂಬೋರೇಟ್ ಗ್ರೌಂಡ್



ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರಾದ ಶ್ರೀ ಡಿ.ಬಿ. ಇನಾಂದಾರ್ ಅವರಿಂದ ಜಾಂಬೋರೇಟ್‌ನಲ್ಲಿ ಭಾಗವಹಿಸಿದ ಮಕ್ಕಳಿಗೆ ನೆನಪಿನ ಕಾಣಿಕೆ ಮತ್ತು ಪ್ರಶಸ್ತಿ ಪತ್ರಗಳ ವಿತರಣೆ

ಪಕ್ಕದಲ್ಲಿರುವ ಐಪಿಪಿ ಬಿಲ್ಡಿಂಗ್ ಕಟ್ಟಡ ಹಾಗೂ ಖಾಲಿ ಇರುವ ನಿವೇಶನವನ್ನು ಸ್ಕೌಟ್ಸ್ ಗೈಡ್ಸ್ ಸಂಸ್ಥೆಗೆ ಖಾಯಂ ಕೊಡಿಸಿಕೊಡುವಂತೆ ಮಾನ್ಯ ಜಿಲ್ಲಾ ಸಚಿವರಿಗೆ ಮತ್ತು ಜಿಲ್ಲಾ ಆಡಳಿತ ಮಂಡಳಿಗೆ ಮನವಿ ಮಾಡಿಕೊಂಡರು ಮತ್ತು ಜಿಲ್ಲಾ ಪಂಚಾಯತ್, ಜಿಲ್ಲಾ ಆಡಳಿತ ವರ್ಗ, ವಿದ್ಯಾ ಇಲಾಖೆಗಳಿಗೆ ಸ್ಕೌಟ್ಸ್ ಗೈಡ್ ಚಳುವಳಿ ಬೆಳೆಯಲು ಸಹಾಯ ಮಾಡಬೇಕೆಂದು ಮತ್ತು ಜಿಲ್ಲೆಯಲ್ಲಿರುವ ಎಲ್ಲಾ ಶಾಲಾ ಕಾಲೇಜುಗಳಲ್ಲಿ ಸ್ಕೌಟ್ ಮತ್ತು ಗೈಡ್ ದಳಗಳನ್ನು ಪ್ರಾರಂಭಿಸಲು ಪ್ರೋತ್ಸಾಹಿಸುವಂತೆ ಮನವಿ ಮಾಡಿದರು.

ಕಾರ್ಯಕ್ರಮದ ವಂದನಾರ್ಪಣೆಯನ್ನು ಜಿಲ್ಲಾ ಖಜಾಂಚಿ ಶ್ರೀ ಆನಂದ ಜಿ ಷರಾಫ್ ಜಿಲ್ಲೆಯ ಪರವಾಗಿ ಹೇಳಿದರು. ರಾಜ್ಯ ಸಂಸ್ಥೆಯ ಪರವಾಗಿ ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಈ ಜಾಂಬೋರೇಟ್ ಯಶಸ್ವಿಗೆ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ಕಾರಣರಾದ ಎಲ್ಲರಿಗೂ ವಂದನೆ ಮತ್ತು ಧನ್ಯವಾದ ಅರ್ಪಿಸಿದರು.

## ಜಾಂಬೋರೇಟ್‌ನ ಮುಕ್ತಾಯ

ದಿನಾಂಕ 10.12.2001 ರಂದು ಬೆಳಿಗ್ಗೆ ಧ್ವಜಾರೋಹಣ ನಡೆಯಿತು. ಜಾಂಬೋರೇಟ್ ಸಂಯೋಜಕರಾದ ಶ್ರೀ ನಾರಾಯಣ ಶೆಟ್ಟಿ, ಶ್ರೀಮತಿ ಪಿ. ಸರೋಜರವರು ಮಕ್ಕಳಿಗೆ ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಹಾಜರಿದ್ದ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಆರ್. ವೆಂಕಣ್ಣ, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಅನಿಲ್ ಆರ್. ಗುಡಿ, ಶ್ರೀ ಸಿ. ಆರ್. ಮಹಮದ್ ಜಹೀರುದ್ದಿನ್, ರಾಜ್ಯ ಆಯುಕ್ತರು (ಸ್ಕೌಟ್) ಶ್ರೀಮತಿ ಬಿ.ವಿ. ರಾಮರತ್ನ, ರಾಜ್ಯ ಜಂಟಿ ಕಾರ್ಯದರ್ಶಿಗಳು (ಗೈಡ್ಸ್) ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಶ್ರೀ ಎಂ.ಎಂ. ಲೋಂಡೆ, ಶ್ರೀ ಮಹಮದ್ ವಾಸಿಲ್ ಇವರುಗಳು ಹಾಜರಿದ್ದು ಮಕ್ಕಳಿಗೆ ಶುಭ ಹಾರೈಸಿದರು. ರಾಜ್ಯ ವಾದ್ಯ ತಂಡದ



ಜಾಂಬೋರೇಟ್ ಮೈದಾನದಲ್ಲಿ ರಾಷ್ಟ್ರಧ್ವಜ, ಭಾರತ್ ಸ್ಕೌಟ್ ಮತ್ತು ಗೈಡ್ ಧ್ವಜ ಹಾಗೂ ಜಾಂಬೋರೇಟ್ ಧ್ವಜದೊಂದಿಗೆ ಜಿಲ್ಲೆಗಳ ಧ್ವಜಗಳು.



ಪಯೊನಿಯರಿಂಗ್ ಚಟುವಟಿಕೆಯಲ್ಲಿ ಸ್ಕೌಟ್‌ಗಳು ನಿರ್ಮಿಸಿದ ವೀಕ್ಷಣ ಗೋಪುರ

ಸಂಗೀತದೊಂದಿಗೆ ರಾಷ್ಟ್ರಗೀತೆ ಹಾಡಿ 24ನೇ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್‌ಗೆ ಮುಕ್ತಾಯ ಘೋಷಿಸಲಾಯಿತು.

ಇದೇ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಕರ್ನಾಟಕ ರಾಜ್ಯದ 25 ನೇ ಸ್ಕೌಟ್ ಮತ್ತು ಗೈಡ್ ಜಾಂಬೋರೇಟ್‌ನ್ನು 2004 ರಲ್ಲಿ ದಾವಣಗೆರೆಯಲ್ಲಿ ನಡೆಸುವುದಾಗಿ ಘೋಷಿಸಿದರು.

## FIRST

I HAD AN IDEA
THEN I SAW AN IDEAL
NOW WE HAVE A MOVEMENT
AND IF SOME OF YOU DON'T WATCH OUT
WE SHALL END UP WITH JUST AN
ORGANISATION.

*- BADEN - POWELL*

# ಕರ್ನಾಟಕ ರಾಜ್ಯ ೨೪ನೇ ಜಾಂಬೋರೇಟ್, ಬೆಳಗಾವಿ



ಪಥಸಂಚಲದಲ್ಲಿ ರಾಜ್ಯ ಬ್ಯಾಂಡ್ ತಂಡ



ಪಥಸಂಚಲದಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು




ಪಥ ಸಂಚಲನದಲ್ಲಿ ವೀರಮಹಿಳೆ ಕಿತ್ತೂರು ರಾಣಿ ಚೆನ್ನಮ್ಮ ಪಾತ್ರಧಾರಿ



ವಸ್ತು ಪ್ರದರ್ಶನವನ್ನು ಉದ್ಘಾಟನೆ ಮಾಡಿದ ಬೆಳಗಾವಿ ನಗರ ಪಾಲಿಕೆ ಆಯುಕ್ತ ಶ್ರೀ ಪಿ.ಎ. ಮೇಘಣ್ಣನವರ್, ಶ್ರೀ ಜಿ.ಎ. ಅಡಗಟ್ಟಿ, ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾವಿ, ಶ್ರೀ ಪಿ.ಎನ್. ಮುರುಗೋಡ್, ಅಬಕಾರಿ ಉಪನಿರ್ದೇಶಕರು, ಶ್ರೀ ಮೃತ್ಯುಂಜಯ ಸ್ವಾಮಿ ಉಪನಿರ್ದೇಶಕರು, ಕರ್ನಾಟ ಭೂಸೇನಾ ನಿಗಮ.



ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಮಕ್ಕಳು



ಸಾಮೂಹಿಕ ಕವಾಯಿತು ಪ್ರದರ್ಶನ ನೀಡುತ್ತಿರುವ ಸ್ಕೌಟ್ಸ್‌ಗಳು



ಸಾಂಸ್ಕೃತಿಕ ಪ್ರದರ್ಶನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು



ಹಗ್ಗದ ಮೇಲೆ ಯೋಗಾಸನ ಪ್ರದರ್ಶನ ನೀಡುತ್ತಿರುವ
ಬಿಜಾಪುರದ ರಾಮಕೃಷ್ಣ ವಿದ್ಯಾ ಶಾಲೆಯ ಗೈಡ್



ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಂದ ಸಾಮೂಹಿಕ ಕವಾಯಿತು ಪ್ರದರ್ಶನ



ಸಾಂಸ್ಕೃತಿಕ ಪ್ರದರ್ಶನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು



ಈ ಸಾಲಿನಲ್ಲಿ ರಾಜ್ಯ ಶೌರ್ಯ ಪ್ರಶಸ್ತಿ ಪಡೆದ ಸ್ಕೌಟ್
ಚಿ|| ಕೆ.ಜೆ. ಕುಮಾರ್‌ಗೆ ಮಾನ್ಯ ಸಚಿವರಿಂದ ಅಭಿನಂದನೆ



ಹಗ್ಗದ ಮೇಲೆ ರೋಮಾಂಚನಕಾರಿ ಯೋಗಾಸನ ಪ್ರದರ್ಶನ ನೀಡಿದ ಬಿಜಾಪುರದ ರಾಮಕೃಷ್ಣಶ್ರಮ ವಿದ್ಯಾಶಾಲೆಯ ಗೈಡ್‌ಗಳಾದ ಕುಮಾರಿ ಶೃತಿ ವರಣೇಕರ್ ಹಾಗೂ ಕುಮಾರಿ ಮೇಘಕಾತರಕಿ ಅವರಿಗೆ ಸಚಿವರಿಂದ ಅಭಿನಂದನ

# ಯುವಕರ ವ್ಯಕ್ತಿತ್ವಕ್ಕೆ ಮೆರುಗು ನೀಡಿದ
# "ಸ್ಕೌಟ್ - ಗೈಡ್ ಜಾಂಬೋರೇಟ್"

***'ಬನ್ನಿ ಓ ಬಾಂಧವರೇ ಕಣ್ತೆರೆದು ಬನ್ನಿ!***
***ಕನ್ನಡದ ಕಿತ್ತೂರ ನೆಲ ನೋಡು ಬನ್ನಿ!***
***ಗಂಡೆದೆಯ ಕಲಿಗಳ ಛಲ ನೋಡ ಬನ್ನಿ!***
***ಬಂಡೆದ್ದ ಭಂಟರ ಬಲ ನೋಡಬನ್ನಿ'***

ಸ್ವಾತಂತ್ರ್ಯ ಸಂಗ್ರಾಮದ ಬೆಳ್ಳಿಚುಕ್ಕೆಯಂದೇ ಚೆನ್ನಮ್ಮ ಮತ್ತು ಆಕೆಯ ಸೈನ್ಯದ ಸಾಹಸ ವೀರಗಾಥೆಯನ್ನು ವಿವರಿಸುವ ಲಯಬದ್ಧ ಹಾಡಿನೊಂದಿಗೆ ಹೆಜ್ಜೆ ಹಾಕುತ್ತಿದ್ದ ಸೇಂಟ್ ಜೋಸೆಫ್ ಶಾಲೆಯ ಮಕ್ಕಳು ಬೆಳಗಾವಿಯಲ್ಲಿ ನಡೆದ 10 ದಿನಗಳ 24ನೇ ರಾಜ್ಯ ಮಟ್ಟದ ಸ್ಕೌಟ್ - ಗೈಡ್ ಜಾಂಬೋರೇಟ್‌ಗೆ ಮುನ್ನುಡಿ ಬರೆದರು.

ವೀರರಾಣಿ ಕಿತ್ತೂರು ಚೆನ್ನಮ್ಮ, ವೀರ ಸಂಗೊಳ್ಳಿ ರಾಯಣ್ಣನ ವೇಷಧಾರಿಗಳು ಮತ್ತು ಸೈನಿಕರ ರೂಪಕ ರಾಜ್ಯದ ವಿವಿಧ ಜಿಲ್ಲೆಗಳಿಂದ ಬಂದಿದ್ದ 5 ಸಾವಿರಕ್ಕೂ ಹೆಚ್ಚು ಮಕ್ಕಳಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸ್ಫೂರ್ತಿ ತುಂಬಿತು. ಕಿತ್ತೂರು ಸೈನ್ಯದ ಸಾಹಸ ವೀರಗಾಥೆ ಕೇಳಿದ ಸ್ಕೌಟ್ - ಗೈಡ್‌ಗಳಲ್ಲಿ ದೇಶಾಭಿಮಾನ ಮೂಡಿತು.

ಬೆಳಗಾವಿಯ ಟಿಳಕವಾಡಿಯ ವಾಯುಪಡೆ ತರಬೇತಿ ಕೇಂದ್ರದ ವಿಶಾಲವಾದ ಮೈದಾನದಲ್ಲಿ ನಡೆದ ಹತ್ತು ದಿನಗಳ ಸ್ಕೌಟ್ - ಗೈಡ್ ಜಾಂಬೋರೇಟ್ ಭವಿಷ್ಯದ ಪ್ರಜೆಗಳಾಗುವ ಯುವಕರ ವ್ಯಕ್ತಿತ್ವಕ್ಕೆ ವಿಶಿಷ್ಯ ಮೆರಗು ನೀಡುವಲ್ಲಿ ಯಶಸ್ವಿಯಾಯಿತು.

ಕಳೆದ 23 ಜಾಂಬೋರೇಟ್‌ಗಳಿಗಿಂತ 24ನೇ ಜಾಂಬೋರೇಟ್ ಭಿನ್ನವಾಗಿತ್ತು. ಈ ಜಾಂಬೋರೇಟ್ ವೈಶಿಷ್ಟ್ಯವೆಂದರೆ ಮಕ್ಕಳಿಗೆ ಸಾಹಸಮಯ ಕಮಾಂಡೋ ತರಬೇತಿ ನೀಡಿದ್ದು. ಅಲ್ಲದೆ ವೈಮಾನಿಕ ಪ್ರದರ್ಶನ ನಡೆಸಿದ್ದು. ಇಂಥ ವಿಶಿಷ್ಟ ಕಾರ್ಯಕ್ರಮಗಳಿಂದ ಪ್ರಭಾವಿತರಾದ ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದ ಮಕ್ಕಳು ದೇಶ ರಕ್ಷಣೆಗೆ ಮುಂದಾಗುವ ನಿರ್ಣಯ ಕೈಕೊಂಡದ್ದು ವಿಶೇಷವಾಗಿತ್ತು.

ಮರಾಠಾ ಲಘು ಪದಾತಿ ದಳದ ಕಮಾಂಡೋ ತರಬೇತಿ ಕೇಂದ್ರದಲ್ಲಿ ಸೇನಾಧಿಕಾರಿಗಳು ಮಕ್ಕಳಿಗೆ ಕಮಾಂಡೋ ತರಬೇತಿ ನೀಡಿದರು. ಭಾರತೀಯ ಸೇನೆಯ ಧೈರ್ಯ, ಸಾಹಸಗಳನ್ನು ಪರಿಚಯಿಸಿದರು.

ವಿಶ್ವಾಸಾರ್ಹ ಜಿಗಿತದ ಪ್ರಾತ್ಯಕ್ಷಿಕೆಯನ್ನು ಪ್ರದರ್ಶಿಸಿದರು. ಈ ಸಾಹಸಮಯ ಕಮಾಂಡೋ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಅಚ್ಚರಿ ಮೂಡಿಸಿದರು. ವೈಮಾನಿಕ ನೆಲೆಯ ಅಧಿಕಾರಿಗಳು ಎನ್‌ಸಿಸಿ ಕೆಡಿಟ್‌ಗಳ ನೆರವಿನೊಂದಿಗೆ ನಡೆಸಿದ ವೈಮಾನಿಕ ಪ್ರದರ್ಶನವಂತೂ ಮಕ್ಕಳ ಪಾಲಿಗೆ ಹಬ್ಬವನ್ನುಂಟು ಮಾಡಿತ್ತು. ವಿವಿಧ ಮಾದರಿಯ ವಿಮಾನಗಳ ಹಾರಾಟ ಮಕ್ಕಳ ಆಸಕ್ತಿ ಮತ್ತು ಕುತೂಹಲ ಕೆರಳಿಸಿತು.

ಜಾಂಬೋರೇಟ್ ಆರಂಭದ ದಿನ ಸ್ಥಳೀಯ "ಇಂದ್ರಧನುಷ" ಸಂಘಟನೆಯ 150ಕ್ಕೂ ಹೆಚ್ಚು ಮಕ್ಕಳು ಬೆಳಗಾವಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಬಿಂಬಿಸುವ ನೃತ್ಯ, ಸಂಗೀತ, ಕಲೆ, ಸಾಹಿತ್ಯ ಮುಂತಾದ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಿ ತಮ್ಮ ಪ್ರತಿಭಾ ಪ್ರದರ್ಶನದ ಮೂಲಕ ರಾಜ್ಯದ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಸಾವಿರಾರು ಸ್ಕೌಟ್ - ಗೈಡ್‌ಗಳಿಗೆ "ಸಾಂಸ್ಕೃತಿಕ ಸ್ವಾಗತ" ನೀಡಿದರು.

ರಾಜ್ಯದ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಮಕ್ಕಳನ್ನು ಸ್ಕೌಟ್ ಮತ್ತು ಗೈಡ್‌ಗಳೆಂದು ಎರಡು ವಿಭಾಗ

ಮಾಡಲಾಗಿತ್ತು. ಸ್ಕೌಟ್‌ಗಳಿಗೆ ಸಂಗೊಳ್ಳಿ ರಾಯಣ್ಣ, ಮಲ್ಲಸರ್ಜ, ಸಿರಸಿಂಗಿ ಲಿಂಗರಾಜ ಮತ್ತು ಬಾಳಪ್ಪ ಹುಕ್ಕೇರಿ ಹೆಸರಿನ ವಿಶೇಷ ಟೆಂಟ್‌ಗಳಲ್ಲಿ ಮತ್ತು ಗೈಡ್‌ಗಳಿಗೆ ರಾಣಿ ಚೆನ್ನಮ್ಮಾ, ಬೆಳವಡಿ ಮಲ್ಲಮ್ಮ, ರೇಣುಕಾ ಯಲ್ಲಮ್ಮ ಮತ್ತು ಮಲಪ್ರಭ ಟೆಂಟ್‌ಗಳಲ್ಲಿ ವಾಸ್ತವ್ಯ ಕಲ್ಪಿಸುವ ಮೂಲಕ ಜಿಲ್ಲೆಯ ಐತಿಹಾಸಿಕ ಪರಂಪರೆಯನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿತ್ತು.

ಜಾಂಬೋರೇಟ್‌ನ ಅಂಗವಾಗಿ ಬೆಳಗಾವಿ ನಗರದ ಪ್ರಮುಖ ಬೀದಿಗಳಲ್ಲಿ ಸಂಚರಿಸಿದ ಸ್ಕೌಟ್ - ಗೈಡ್‌ಗಳ ಆಕರ್ಷಕ ಪಥಸಂಚಲನ ಸಾರ್ವಜನಿಕ ಗಮನ ಸೆಳೆಯಿತು. ಈ ಪಥಸಂಚಲನದಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ನೀತಿ ಬೋಧಕ ಸಾಕ್ಷರತೆ, ಆರೋಗ್ಯ ರಕ್ಷಣೆ, ಪರಿಸರ ಸ್ವಚ್ಛತೆಯ ಅರಿವು ಮೂಡಿಸುವ ಫಲಕಗಳನ್ನು ಹಿಡಿದು ಸಾಗಿದ್ದರು. ಇದರಿಂದ ಜನರಲ್ಲಿ ಜಾಗೃತಿ ಉಂಟು ಮಾಡುವ ಚಿಕ್ಕ ಪ್ರಯತ್ನವನ್ನು ಈ ಮಕ್ಕಳು ಮಾಡಿದರು.

ಜಾಂಬೋರೇಟ್‌ನಲ್ಲಿ ನಡೆದ ಶಿಬಿರಾಗ್ನಿ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮಕ್ಕಳು ತಮ್ಮ ಪ್ರತಿಭಾ ಪ್ರದರ್ಶನ ಮೆರೆದರು.

ಕೊರೆಯುವ ಚಳಿಯನ್ನೂ ಲೆಕ್ಕಿಸದೇ ಮೈಚಳಿ ಬಿಟ್ಟು ಕುಣಿದು ಕುಪ್ಪಳಿಸಿದರು. ಸಾಂಸ್ಕೃತಿಕ ಲೋಕದಲ್ಲಿ ವಿಹರಿಸಿದರು. ಇಡೀ ಜಾಂಬೋರೇಟ್ ಝಗಮಗಿಸುವ ಹೊಂಬೆಳಕಿನಲ್ಲಿ ಜ್ವಾಲೆ ಉರಿಯುತ್ತಿದ್ದಂತೆ ಹೋ... ಹೋ... ಎಂದು ಕುಣಿದು ಕುಪ್ಪಳಿಸಿ ತಮ್ಮನ್ನೇ ತಾವು ಮರೆತರು.

ಜಾತಿ, ಮತ, ಪಂಥ, ಮೇಲು - ಕೀಳು ಯಾವ ಬೇಧಭಾವವಿಲ್ಲದೇ ಎಲ್ಲರೂ ಒಂದಾದರು. ಆದೊಂದು ಅಪೂರ್ವ ಸನ್ನಿವೇಶವಾಗಿತ್ತು.

ವಿವಿಧ ಜಿಲ್ಲೆಗಳ ಜಾನಪದ ಸೊಗಡನ್ನು ಪ್ರತಿಬಿಂಬಿಸುವ ''ಜಾನಪದ ಲೋಕ'' ಕಾರ್ಯಕ್ರಮ ಅತ್ಯಂತ ವಿಶಿಷ್ಟವಾಗಿತ್ತು.

ಆಯಾ ಜಿಲ್ಲೆಯ ಮಕ್ಕಳು ತಮ್ಮ ತಮ್ಮ ಜಿಲ್ಲೆಯ ಸಾಂಸ್ಕೃತಿಕ ವೈಭವ, ಪರಂಪರೆಯನ್ನು ಪ್ರತಿಬಿಂಬಿಸುವ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಿದರು. ಮಡಿಕೇರಿ ಜಿಲ್ಲೆಯ ಮಕ್ಕಳು ಕೊಡಗಿನ ಜಾನಪದ ಸೊಬಗನ್ನು, ದಾವಣಗೆರೆ ಜಿಲ್ಲೆಯ ಮಕ್ಕಳು ದುಗ್ಗಮ್ಮನ ಜಾತ್ರೆ, ಬೆಳಗಾವಿ ಜಿಲ್ಲೆಯವರು ವೀರರಾಣಿ ಕಿತ್ತೂರು ಚೆನ್ನಮ್ಮನ ಸಾಹಸಗಾಥೆಯನ್ನು, ಧಾರವಾಡ ಜಿಲ್ಲೆಯ ಮಕ್ಕಳು ಜಾತ್ರಾ ವಿಶೇಷಗಳನ್ನು ಪರಿಚಯಿಸುವ ರೂಪಕಗಳ ಮೂಲಕ ತಮ್ಮ ಜಿಲ್ಲೆಯ ಜಾನಪದ ಲೋಕವನ್ನು ಪರಿಚಯಿಸಿದರು.

ಜಾಂಬೋರೇಟ್‌ನಲ್ಲಿ ಏರ್ಪಡಿಸಿದ್ದ ವಸ್ತು ಪ್ರದರ್ಶನ ಮಕ್ಕಳ ಪ್ರತಿಭಾ ಪ್ರದರ್ಶನಕ್ಕೊಂದು ಉತ್ತಮ ವೇದಿಕೆ ಒದಗಿಸಿತ್ತು.

ಈ ವಸ್ತು ಪ್ರದರ್ಶನದಲ್ಲಿ ಮಕ್ಕಳು ಸಾಕ್ಷರತೆಯ ಮಹತ್ವ, ಕುಷ್ಠ ರೋಗದ ನಿವಾರಣೋಪಾಯಗಳು, ಜನಶಿಕ್ಷಣದ ಮಹತ್ವ, ಜನಸಂಖ್ಯಾ ಸ್ಫೋಟದ ದುಷ್ಪರಿಣಾಮಗಳು, ಅರಣ್ಯ ರಕ್ಷಣೆ, ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳು ಹೀಗೆ ಹತ್ತು ಹಲವು ಬಗೆಯ ವಿಷಯಾಧಾರಿತ ವಸ್ತು ಪ್ರದರ್ಶನ ಜಾಂಬೋರೇಟ್‌ನ ವಿಶೇಷ ಆಕರ್ಷಣೆಯಾಗಿತ್ತು.

ಹತ್ತು ದಿನಗಳ ಕಾಲ ನಡೆದ 24ನೇ ರಾಜ್ಯ ಮಟ್ಟದ ಜಾಂಬೋರೇಟ್ ಮಕ್ಕಳಲ್ಲಿ ಧೈರ್ಯ, ಸಾಹಸ, ರಾಷ್ಟ್ರೀಯ ಭಾವೈಕ್ಯತೆ, ಸಹಬಾಳ್ವೆ, ಸಮಯ ಪ್ರಜ್ಞೆ, ಶಿಸ್ತು, ಸಂಯಮ ಹೀಗೆ ವ್ಯಕ್ತಿಯ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗುವ ವಾತಾವರಣ ಕಲ್ಪಿಸಿತ್ತು.

ಭವಿಷ್ಯದ ನಾಗರಿಕರಾಗುವ ಯುವ ಜನಾಂಗಕ್ಕೆ ದಾರಿ ದೀಪವಾಗಿದ್ದ ಈ ಜಾಂಬೋರೇಟ್ ಉದ್ದೇಶ ಈಡೇರುವಿಕೆಯಲ್ಲಿ ಸಾಫಲ್ಯ ಪಡೆಯಿತು ಎಂದರೆ ಅತಿಶಯೋಕ್ತಿಯಾಗಲಾರದು.

ಡಾ|| ಓಂಕಾರ ಕಾಕಡೆ

ಕೃಪೆ : ಪ್ರಜಾವಾಣಿ ದಿನಾಂಕ : 24-12-2001

# DECCAN HERALD

## Scouts Jamborette begins in Belgaum

DH News Service

BELGAUM, Dec 6

The six-day 24th Jamborette of the Karnataka State Bharat Scouts and Guides began on a colourful and impressive note here yesterday. The Jamborette is being attended by nearly 5,000 Scouts and Guides from all the 29 Scouts and Guides Districts in Karnataka besides Mr Nicolo Galbo, a Scout Master from Italy.

Energy Minister Veerak umar Patil, who inaugurated the Jamborette at the Air Force Training Grounds, praised the Scout movement in developing a spirit of adventure and selfless service amongst the boys and girls.

Mr Ramesh Kudachi, Member of the Legislative Assembly, presided over the inaugural function which was addressed, amongst others, by Mr Anjum Parvez, chief executive officer, Belgaum Zilla Panchayat and Mr A R Gudi, Belgaum District Chief Commissioner, Bharat Scouts and Guides.

Earlier, Mr Om Prakash, IGP (Northern Range), flagged off an impressive route march of the Scouts and Guides at the Lingaraj College grounds. Mr Kondajji B Shanm ukhappa, State Chief Com missioner, Bharat Scouts and Guides, were among those who witnessed the route march.

# ಪ್ರಜಾವಾಣಿ

## ಸ್ಕೌಟ್ಸ್‌ಗೆ ಅನುದಾನ ಹೆಚ್ಚಳ: ಭರವಸೆ

ಬೆಳಗಾವಿ, ಡಿ. 5– ರಾಜ್ಯ ಸರ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ನೀಡುತ್ತಿರುವ ಅನುದಾನವನ್ನು ಹೆಚ್ಚಿಸಲು ಪ್ರಾಮಾಣಿಕ ಪ್ರಯತ್ನ ಮಾಡುವುದಾಗಿ ಇಂಧನ ಖಾತೆ ಸಚಿವ ವೀರಕುಮಾರ್ ಪಾಟೀಲ್ ಅವರು ಇಂದು ಇಲ್ಲಿ ಭರವಸೆ ನೀಡಿದರು.

ನಗರದ ವಾಯುಪಡೆಯ ತರಬೇತಿ ಮೈದಾನದಲ್ಲಿ ನಡೆಯುತ್ತಿರುವ 24ನೇ ಜಾಂಬೋರೇಟ್ ಉದ್ಘಾಟಿಸಿ ಅವರು ಮಾತನಾಡಿ, ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಕೇವಲ ರೂ 5 ಲಕ್ಷ ಅನುದಾನ ಇದೆ. ಈ ಅನುದಾನ ಹೆಚ್ಚಳ ಮಾಡುವುದು ಅಗತ್ಯ ಎಂದರು.

ಪಥ ಸಂಚಲನ: ಜಾಂಬೋರೇಟ್ ಅಂಗವಾಗಿ ಇಂದು ಬೆಳಿಗ್ಗೆ ನಗರದಲ್ಲಿ ನಡೆದ ಆಕರ್ಷಕ ಪಥ ಸಂಚಲನ ಸಾರ್ವಜನಿಕರ ಕಣ್ಮನ ಸೆಳೆಯಿತು. ಈ ಜಾಂಬೋರೇಟ್‌ನಲ್ಲಿ ಭಾಗವಹಿಸಲು ರಾಜ್ಯದ ವಿವಿಧ ಜಿಲ್ಲೆಗಳಿಂದ ಬಂದಿರುವ 4500ಕ್ಕೂ ಹೆಚ್ಚು ಮಕ್ಕಳು ಈ ಪಥ ಸಂಚಲನದಲ್ಲಿ ಭಾಗವಹಿಸಿದ್ದರು. ನಗರದ ಲಿಂಗರಾಜ ಕಾಲೇಜು ಮೈದಾನದಲ್ಲಿ ಉತ್ತರ ವಲಯದ ಐಜಿಪಿ ಓಂಪ್ರಕಾಶ್ ಪಥ ಸಂಚಲನ ಉದ್ಘಾಟಿಸಿದರು.

ಸ್ಥಳೀಯ ಶಾಸಕ ರಮೇಶ ಕುಡಚಿ ಅಧ್ಯಕ್ಷತೆ ವಹಿಸಿದ್ದರು. ಮರಾಠಾ ಲಘು ಪದಾತಿ ದಳದ ಮುಖ್ಯಸ್ಥ ಬ್ರಿಗೇಡಿಯರ್ ಎ.ಬಿ.ಸಯ್ಯದ್, ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯದ ಆಯುಕ್ತ ಕೊಂಡಜ್ಜಿ ಷಣ್ಮುಖಪ್ಪ, ಎಂ.ಬಿ.ಬೋಪಯ್ಯ, ಅಮಿತ್‌ಕುಮಾರ್, ರಾಮರತ್ನ ಉಪಸ್ಥಿತರಿದ್ದರು.

ಇಟಾಲಿಯನ್‌ನ ಸ್ಕೌಟ್ ಮಾಸ್ಟರ್ ನಿಕೋಲೋ ಗ್ಯಾಲ್ಬೋ ಈ ಜಾಂಬೋರೇಟ್‌ನಲ್ಲಿ ಭಾಗವಹಿಸಿರುವುದೊಂದು ವಿಶೇಷ. ನಗರದ ಸೇಂಟ್ ಜೋಸೆಫ್ ಶಾಲೆಯ ಮಕ್ಕಳು ಪ್ರಸ್ತುತಪಡಿಸಿದ ವೀರರಾಣಿ ಕಿತ್ತೂರು ಚೆನ್ನಮ್ಮ ರೂಪಕ ಅತ್ಯಂತ ಆಕರ್ಷಕವಾಗಿತ್ತು. ಈ ರೂಪಕ ಇಡೀ ಕಾರ್ಯಕ್ರಮಕ್ಕೆ ಹೆಚ್ಚಿನ ಮೆರಗು ನೀಡಿತು.

ಪ್ರಭಾರಿ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಅಂಜುಂ ಪರ್ವೇಜ್ ಸ್ವಾಗತಿಸಿದರು. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಆಯುಕ್ತ ಅನಿಲ್ ಗುಡಿ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಬಿ.ವಿ.ರಾಮರತ್ನ ವಂದಿಸಿದರು.

# ಸಂಯುಕ್ತ ಕರ್ನಾಟಕ

## *ಬೆಳಗಾವಿ: ಇಂದಿನಿಂದ ಜಾಂಬೋರೇಟ್ ಆರಂಭ*

ಬೆಳಗಾವಿ, 3- ರಾಜ್ಯ ಮಟ್ಟದ 24 ನೇ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಕಾರ್ಯಕ್ರಮಗಳು ನಾಳೆ ದಿನಾಂಕ 4 ರಿಂದ 10 ರವರೆಗೆ ನಗರದ ಭಾರತೀಯ ವಾಯುದಳ ತರಬೇತಿ ಮೈದಾನದಲ್ಲಿ ನಡೆಯಲಿವೆ.

'ಸ್ವಚ್ಛ ನಮ್ಮ ಹಳ್ಳಿ' ಎಂಬ ಧ್ಯೇಯವನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ವ್ಯವಸ್ಥೆ ಮಾಡಿರುವ ಈ ಜಾಂಬೋರೇಟ್‌ನಲ್ಲಿ ವಿವಿಧ ಜಿಲ್ಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರತಿನಿಧಿಗಳು ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲಿದ್ದಾರೆ.

ದಿನಾಂಕ 4 ರಂದು ಸಂಜೆ 6.30 ಕ್ಕೆ ಸ್ಥಳೀಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪ್ರತಿಭಾ ಪ್ರದರ್ಶನ ನಡೆಯಲಿದ್ದು ಈ ಕಾರ್ಯಕ್ರಮದಲ್ಲಿ ಶಾಸಕ ಎಸ್.ಸಿ.ಮಾಳಗಿ ಮುಖ್ಯ ಅತಿಥಿಗಳಾಗಿ ಆಗಮಿಸುವರು. ಶಾಸಕ ಮನೋಹರ ಕಡೋಲ್ಕರ ಅಧ್ಯಕ್ಷತೆ ವಹಿಸುವರು.

ದಿನಾಂಕ 5 ರಂದು ಬೆಳಿಗ್ಗೆ 10 ಕ್ಕೆ ವಿವಿಧ ಜಿಲ್ಲೆಗಳಿಂದ ಆಗಮಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರತಿನಿಧಿಗಳು ಪಥಸಂಚಲನ ನಡೆಸುವರು. ಉತ್ತರ ವಲಯ ಐಜಿಪಿ ಓಂಪ್ರಕಾಶ್ ಕಾರ್ಯಕ್ರಮ ಮೂಲಕ ಉದ್ಘಾಟಿಸುವರು.

ಅದೇ ದಿನ ಸಂಜೆ 4 ಕ್ಕೆ ಉದ್ಘಾಟನಾ ಸಮಾರಂಭ ನಡೆಯಲಿದೆ. ಶಾಸಕ ರಮೇಶ ಕುಡಚಿ ಅಧ್ಯಕ್ಷತೆಯಲ್ಲಿ ನಡೆಯುವ ಕಾರ್ಯಕ್ರಮವನ್ನು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಸಚಿವ ಎಸ್.ಎಸ್.ಮಲ್ಲಿಕಾರ್ಜುನ್ ಉದ್ಘಾಟಿಸುವರು. ಇಂಧನ ಸಚಿವ ವೀರಕುಮಾರ ಪಾಟೀಲ, ಸಂಸದರಾದ ಅಮರಸಿಂಹ ಪಾಟೀಲ, ರಮೇಶ ಜಿಗಜಿಣಗಿ, ಮರಾಠಾ ಲೈಟ್ ಇನ್‌ಫೆಂಟ್ರಿಯ ಕಮಾಂಡೆಂಟ್ ಬ್ರಿಗೇಡಿಯರ್ ಎ.ಬಿ.ಸಯ್ಯದ, ವಾಯುಸೇನೆಯ ಸ್ಟೇಶನ್ ಕಮಾಂಡರ್ ಗ್ರುಪ್ ಕ್ಯಾಪ್ಟನ್ ರವೀಂದ್ರಸಿಂಗ್ ರಾಘವ, ಭೂಸೇನಾ ನಿಗಮದ ಅಧ್ಯಕ್ಷ ಎಸ್.ಬಿ.ಘಾಟಗೆ, ಕೊಂಡಜ್ಜಿ, ಬಿ.ಷಣ್ಮುಖಪ್ಪ ಮತ್ತಿತರರು ಮುಖ್ಯ ಅತಿಥಿಗಳಾಗಿ ಆಗಮಿಸುವರು.

ಸಂಜೆ 8.30 ಕ್ಕೆ ಶಿಬಿರಾಗ್ನಿ ಪ್ರಜ್ವಲನ ಕಾರ್ಯಕ್ರಮ ನಡೆಯಲಿದ್ದು, ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಅನಿಲ ಪೋತದಾರ, ಅರಣ್ಯ ಸಂರಕ್ಷಣಾಧಿಕಾರಿ ಜಿ.ಎಸ್.ಪ್ರಭು, ಸಹಕಾರ ಇಲಾಖೆಯ ಜಂಟಿ ರಜಿಸ್ಟ್ರಾರ್ ವಿ.ಕರಿಬಸಪ್ಪ, ಐ.ಎನ್.ಮುದ್ನೂರ ಮತ್ತು ಎಸ್.ಶಂಕರಪ್ಪ ಅತಿಥಿಗಳಾಗಿ ಆಗಮಿಸುವರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕ ಜಿ.ವ್ಹಿ.ನಾಯಕ ಅಧ್ಯಕ್ಷತೆ ವಹಿಸುವರು.

ದಿನಾಂಕ 6 ರಂದು ಬೆಳಿಗ್ಗೆ 11.30 ಕ್ಕೆ ವಸ್ತು ಪ್ರದರ್ಶನ ವ್ಯವಸ್ಥೆ ಮಾಡಲಾಗಿದೆ. ಮಹಾನಗರ ಪಾಲಿಕೆಯ ಆಯುಕ್ತ ಪಿ.ಎ.ಮೇಘಣ್ಣವರ, ಪ್ರಾಧಿಕಾರದ ಆಯುಕ್ತ ಜಿ.ಎ.ಬಡಗಟ್ಟಿ, ಕೈಗಾರಿಕಾ ಇಲಾಖೆಯ ಜಂಟಿ ನಿರ್ದೇಶಕ ಗುರುನಾಥ ಕುಲಕರ್ಣಿ, ಅಬಕಾರಿ ಜಿಲ್ಲಾಧಿಕಾರಿ ಪಿ.ಎನ್.ಮುರಗೋಡ ಮತ್ತು ಭೂಸೇನಾ ನಿಗಮದ ಉಪನಿರ್ದೇಶಕ ಮೃತ್ಯುಂಜಯ ಅತಿಥಿಗಳಾಗಿ ಆಗಮಿಸುವರು.

ಅದೇ ದಿನ ಸಂಜೆ 6 ಕ್ಕೆ ಜಾನಪದ ಸುಗ್ಗಿ ಕಾರ್ಯಕ್ರಮ ನಡೆಯಲಿದೆ. ಈ ಕಾರ್ಯಕ್ರಮದಲ್ಲಿ ಬೆಳಗಾವಿ ವಿಭಾಗಾಧಿಕಾರಿ ಬಿ.ಎ.ಕುಟಿನ್ಹೊ, ಜಿಲ್ಲಾ ಪಂಚಾಯತ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಅಂಜುಮ್ ಪರ್ವೇಜ್ ಅತಿಥಿಗಳಾಗಿ ಆಗಮಿಸುವರು. ಜಿಲ್ಲಾಧಿಕಾರಿ ಅತುಲ್‌ಕುಮಾರ ತಿವಾರಿ ಅಧ್ಯಕ್ಷತೆ ವಹಿಸುವರು.

ದಿನಾಂಕ 7 ರಂದು ಮಧ್ಯಾಹ್ನ 3.30 ಕ್ಕೆ ರೂಪಕಗಳ ಪ್ರದರ್ಶನ ನಡೆಯಲಿದೆ. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕ ಸಿದ್ದಯ್ಯ, ಜಿಲ್ಲಾ ಪಂಚಾಯತ ಉಪಾಧ್ಯಕ್ಷ ಪಾರೀಶ್ ಉಗಾರೆ, ಉಪಮಹಾಪೌರ ಶ್ರೀಮತಿ ವೀಣಾ ಕೋಲಕಾರ ಮತ್ತಿತರರು ಅತಿಥಿಗಳಾಗಿ ಆಗಮಿಸುವರು. ವಿಧಾನ ಪರಿಷತ್ ಸದಸ್ಯ ಪ್ರಭಾಕರ ಕೋರೆ ಅಧ್ಯಕ್ಷತೆ ವಹಿಸುವರು.

ದಿನಾಂಕ 8 ರಂದು ಬೆಳಿಗ್ಗೆ 9 ಕ್ಕೆ ಶೌರ್ಯ ಹಾಗೂ ಸಾಹಸ ಪ್ರದರ್ಶನವನ್ನು ಕರ್ನಲ್ ಜೆ.ಸಿ.ಮೆಂದಿರಾಟಾ ಉದ್ಘಾಟಿಸುವರು. 11 ಕ್ಕೆ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕಮೀಶನರ್ ಹಾಗೂ ಕಾರ್ಯದರ್ಶಿಗಳ ಭೆಟ್ಟಿ ಕಾರ್ಯಕ್ರಮವಿದೆ. ಮಧ್ಯಾಹ್ನ 2.30 ಕ್ಕೆ ವಾದ್ಯ ಮೇಳದೊಂದಿಗೆ ವಾದ್ಯಗೋಷ್ಠಿಯನ್ನು ವ್ಯವಸ್ಥೆ ಮಾಡಲಾಗಿದ್ದು ಜಿಲ್ಲಾ ಪೊಲೀಸ ವರಿಷ್ಠ ಬಿ.ದಯಾನಂದ ಮುಖ್ಯ ಅತಿಥಿಗಳಾಗಿ ಆಗಮಿಸುವರು. ಸಂಜೆ 6.30 ಕ್ಕೆ ಮಹಾಶಿಬಿರಾಗ್ನಿ ಪ್ರಜ್ವಲ ಕಾರ್ಯಕ್ರಮವನ್ನು ಕಾಡಾ ಅಧ್ಯಕ್ಷ ಪ್ರಕಾಶ್ ಹುಕ್ಕೇರಿ ಉದ್ಘಾಟಿಸುವರು. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಕುಲಪತಿ ಬಲವೀರ ರೆಡ್ಡಿ ಅತಿಥಿಗಳಾಗಿ ಆಗಮಿಸುವರು.

ದಿನಾಂಕ 9 ರಂದು ಬೆಳಿಗ್ಗೆ 7 ಕ್ಕೆ ಸರ್ವಧರ್ಮ ಪ್ರಾರ್ಥನೆ ನಡೆಯಲಿದೆ. ಸಂಜೆ 4 ಕ್ಕೆ ಸಮಾರೋಪ ಸಮಾರಂಭ ನಡೆಯಲಿದ್ದು ರಾಜ್ಯದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವ ಎಚ್.ವಿಶ್ವನಾಥ ಸಮಾರೋಪ ಭಾಷಣ ಮಾಡುವರು. ಆಹಾರ ಮತ್ತು ನಾಗರಿಕ ಪೂರೈಕೆ ಇಲಾಖೆಯ ಸಚಿವ ಡಿ.ಬಿ.ಇನಾಮದಾರ್ ಪ್ರಶಸ್ತಿ ಹಾಗೂ ಫಲಕಗಳನ್ನು ವಿತರಿಸುವರು. ಜಿಲ್ಲಾ ಪಂಚಾಯತ ಅಧ್ಯಕ್ಷೆ ಶ್ರೀಮತಿ ಲಲಿತಾ ಬೌಗಲಾ ಸ್ಮರಣ ಸಂಚಿಕೆ ಬಿಡುಗಡೆ ಮಾಡುವರು. ಮಹಾಪೌರ ಶ್ರೀಮತಿ ನಂದನಾ ಬೆಳಗುಂದಕರ ಪ್ರಶಸ್ತಿಗಳನ್ನು ಪ್ರಧಾನ ಮಾಡಲಿದ್ದು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತ ಟಿ.ಎಂ.ವಿಜಯಭಾಸ್ಕರ ಮುಖ್ಯ ಅತಿಥಿಗಳಾಗಿ ಆಗಮಿಸುವರು. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಶಾಖೆಯ ಕಮೀಶ್ನರ್ ಕೊಂಡಜ್ಜಿ ಷಣ್ಮುಖಪ್ಪ ಅಧ್ಯಕ್ಷತೆ ವಹಿಸುವರು.



# The New Indian Express

## Permanent site for Scouts jamboree promised

EXPRESS NEWS SERVICE

**Belgaum, Dec 9:** The Food and Civil Supplies Minister, D B Inamdar on Sunday promised that Belgaum city would soon have a permanent Scouts and Guides jamboree site.

Speaking at the 24th Bharat Scouts and Guides Jamboree valedictory function, Inamdar said there was a necessity for a permanent camp site as it was very difficult for the district administration to hold the annual event in different parts of the city.

"Once a permanent site is earmarked, all difficulties of hosting the jamboree would vanish," Inamdar said, adding that children, especially students can nurture feelings of brotherhood and friendship through such camps. "There is a need for holding more such camps in the future, since the children are the real assets of the country," Inamdar said.

He laid emphasis on the participation of school children in such camps. "It ought to be mandatory, as children can learn many good things in life," Inamdar opined.

The District Chief Commissioner, Anil R Gudi urged Inamdar and the ZP chief executive officer, Anjum Perwez to earmark a site adjacent to the Air Force training grounds at Chouglewadi for the next scouts and guides jamboree.

"The present site lacked space. We require at least 30 acres of land for conducting the jamboree," pleaded Gudi. The site is quite approachable also, as there is access to public transport system, he added.

Gudi also urged the State government and the district administration to install at least 13 computers at every taluka office of Belgaum district so that the scouts and guides masters could avail of the facilities and train the students in turn.

"This request can be met since companies like Aptech and Keonics have already signed an agreement with the government for providing help in computer education," Gudi said.

Two sets of uniforms should also be distributed to scouts and guides cadets hailing from rural areas to boost their morale, Gudi added.

Present on the occasion were Mayor Vandana Belgundkar, ZP president Lalitha M Chougla, Kondajji B Shanmukhappa, state chief commissioner, Bharat Scouts and Guides, Karnataka and others.

# ವಿಜಯ ಕರ್ನಾಟಕ

## ಬೆಳಗಾವಿಗೆ ಶಾಶ್ವತ ಸ್ಕೌಟ್ಸ್, ಗೈಡ್ಸ್ ತರಬೇತಿ ಕೇಂದ್ರ: ಇನಾಮದಾರ್ ಘೋಷಣೆ

ಬೆಳಗಾವಿ,ಡಿ.9-ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಹೆಚ್ಚಿನ ಮಹತ್ವ ಕಲ್ಪಿಸುವ ನಿಟ್ಟಿನಲ್ಲಿ ಶೀಘ್ರದಲ್ಲಿ ಬೆಳಗಾವಿಯಲ್ಲಿ 'ಶಾಶ್ವತ ತರಬೇತಿ ಕೇಂದ್ರ ಸ್ಥಾಪಿಸಲಾಗುವುದು ಎಂದು ರಾಜ್ಯ ಆಹಾರ ಮತ್ತು ನಾಗರಿಕ ಸರಬರಾಜು ಖಾತೆ ಸಚಿವ ಡಿ.ಬಿ.ಇನಾಮದಾರ್ ಇಂದಿಲ್ಲಿ ಪ್ರಕಟಿಸಿದರು.

ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮಟ್ಟದ 24ನೇ ಜಾಂಬೋರೇಟ್ ಸಮಾವೇಶ ಸಮಾರೋಪ ಸಮಾರಂಭ ಉದ್ದೇಶಿಸಿ ಮಾತನಾಡಿದ ಅವರು, ಸ್ಕೌಟ್ಸ್ ಮತ್ತು ಗೈಡ್ಸ್ ಪರಿಣಾಮಕಾರಿಯಾಗಿ ಬೆಳೆಸುವ ಉದ್ದೇಶದಿಂದ ಪ್ರಾರಂಭಿಸಲಾಗುವ ಶಾಶ್ವತ ತರಬೇತಿ ... ಮೂಡಿ ಬಂದಿಲ್ಲ. ಇದು ಕೆಲವರಿಗಷ್ಟೇ ಸೀಮಿತವಾಗಿದೆ. ಈ ದಿಶೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಪ್ರತಿಯೊಬ್ಬರೂ ಭಾಗವಹಿಸಿ ಏಕತೆಯನ್ನು ಮೂಡಿಸಲು ಮುಂದಾಗಬೇಕು. ಈ ನಿಟ್ಟಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಆಂದೋಲನ ನಡೆಯಬೇಕಿದೆ ಎಂದು ಸಚಿವರು ಕರೆ ನೀಡಿದರು.

ಬೆಳಗಾವಿಯಲ್ಲಿ ಆರು ದಿನಗಳ ಕಾಲ ಜರುಗಿದ ರಾಜ್ಯ ಮಟ್ಟದ ಜಾಂಬೋರೇಟ್ ಸಮಾವೇಶದಿಂದ ಮಕ್ಕಳಲ್ಲಿ ಸ್ನೇಹ, ಸಹಾಯ ಹಾಗೂ ಮಾನವೀಯ ಮನೋಭಾವನೆ ಬೆಳೆಯಲು ಸಹಾಯಕವಾಗಿದೆ. ಶಿಬಿರದಲ್ಲಿ ನಡೆದ ಸಾಹಸ ಕ್ರೀಡೆ, ಏರೋಮಾಡಲಿಂಗ್ ... ಮರೆತು ಏಕತೆ ಮೂಡಿಸುವ ಒಂದು ವಿಶಿಷ್ಟ ಪಡೆಯಾಗಿದೆ. ಇದರ ಧ್ಯೇಯೋದ್ದೇಶ ಪ್ರಸಂಶಾರ್ಹವಾಗಿದೆ. ಇದಕ್ಕೆ ಪ್ರೋತ್ಸಾಹ ನೀಡುವ ದಿಶೆಯಲ್ಲಿ ಪ್ರತಿಯೊಬ್ಬರು ಇದರಲ್ಲಿ ಪಾಲ್ಗೊಳ್ಳಲು ಮುಂದಾಗಬೇಕು ಎಂದು ಸಚಿವರು ಮನವಿ ಮಾಡಿದರು.

ಇದೇ ವೇಳೆ ಹಗ್ಗದ ಮೇಲೆ ಯೋಗಾಸನ ಮಾಡಿ ಎಲ್ಲರನ್ನು ನಿಬ್ಬೆರಗಾಗಿಸಿದ ವಿಜಾಪೂರದ ರಾಮಕೃಷ್ಣ ಪ್ರಾಥಮಿಕ ಶಾಲೆಯ ವಿದ್ಯಾರ್ಥಿನಿಯರಾದ ಕುಮಾರಿ ಶ್ರುತಿ ವರ್ಣೇಕರ್ ಮತ್ತು ಮೇಘಾ ಕಾಶರಕಿ ಅವರ ಧೈರ್ಯ ಸಾಹಸವನ್ನು ಸಚಿವರು ಕೊಂಡಾಡಿ, ಮಕ್ಕಳಿಗೆ ಮಾಲೆ ಹಾಕುವ

# स्काऊट- गाईड मेळाव्याची सांगता

चाललेल्या मेळाव्याचा एकी शिस्तबद्ध व विविधरंगी कार्यक्रमाने सांगता झाली.

यावेळी बोलताना राज्याचे अन्न व नागरी पुरवठा मंत्री डी. बी. इनामदार यांनी गेल्या सहा दिवसांमध्ये सहभागी झालेल्या सर्व विद्यार्थ्यांमध्ये समाजसेवेची भावना रुजविण्यात आली आहे. याचा सर्व विद्यार्थ्यांनी प्रसार करण्यात आलेल्या सर्व गोष्टींचा लवकरात लवकर पूर्तता करण्याचे आश्वासनही त्यांनी दिले.

सर्व छात्रांच्या प्रार्थनेने कार्यक्रमास सुरुवात झाली. जिल्हा पंचायतीचे मुख्य कार्यकारी अधिकारी अंजुम परवेझ यांनी स्वागत केले. या मेळाव्यासाठी परिश्रम घेतलेल्या सर्वांना मेळाव्यात झालेल्या सर्व कार्यक्रमांचा आढावा घेतला. जिल्हा स्काऊट मुख्य आयुक्त अनिल गुडी यांनी स्काऊट गाईडसाठी काही सूचना व मैदानाची कमतरता भासत असल्याचे सांगितले.

या कार्यक्रमात प्रेमा मगदूरे यांनी जंबोरेट गीत सादर केले. उपस्थित छात्रांनी समूह कवायत केली. शाली आणि मेधा या छात्रांनी दोरीवरील योगासने सादर करून उपस्थितांची दाद मिळविली. त्यांचा इनामदार यांच्या हस्ते खास सत्कार करण्यात आला. महापौर वंदना बेळगुंदकर यांच्या हस्ते प्रशस्तीपत्रकांचे वितरण झाले.

कार्यक्रमास जिल्हा पंचायत अध्यक्ष [illegible] चौगला, राज्य स्काऊट- गाईडचे पदाधिकारी व इतर मान्यवर उपस्थित होते. [illegible] जिल्हा संघटक [illegible]



